# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಂ. ನಾರಾಯಣಸ್ವಾಮಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1098

ಉತ್ತರಿಸಬೇಕಾದ ದಿನಾಂಕ : 21.09.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೈತರಿಗಾಗಿ ಇರುವ ವಿವಿಧ ಸಾಲ ಯೋಜನೆಗಳಾವುವು; ಈ ಯೋಜನೆಗಳಿಗೆ ಎರಡು ವರ್ಷಗಳಿಂದ ಸರ್ಕಾರ ಬಿಡುಗಡೆಗೊಳಿಸಿದ ಒಟ್ಟು ಮೊತ್ತವೆಷ್ಟು; | ರಾಜ್ಯದಲ್ಲಿ ರೈತರಿಗಾಗಿ ಈ ಕೆಳಕಂಡ ವಿವಿಧ ಯೋಜನೆಗಳಡಿ ಸಾಲ ಸೌಲಭ್ಯ ನೀಡಲಾಗುತ್ತಿದೆ.<br><br>1) ಅಲ್ಪಾವಧಿ ಕೃಷಿ ಬೆಳೆ ಸಾಲ:- ಪ್ರಾಥಮಿಕ ಕೃಷಿ ಪತ್ತಿನ ಸಂಘಗಳ ಮುಖಾಂತರ ರೈತರಿಗೆ ಶೂನ್ಯ ಬಡ್ಡಿ ದರದಲ್ಲಿ ರೂ.3.00 ಲಕ್ಷಗಳವರೆಗೆ ಅಲ್ಪಾವಧಿ ಬೆಳೆ ಸಾಲ ವಿತರಿಸಲಾಗುತ್ತಿದೆ.<br><br>2) ಮಧ್ಯಮಾವಧಿ ಕೃಷಿ ಸಾಲ:- ಪ್ರಾಥಮಿಕ ಕೃಷಿ ಪತ್ತಿನ ಸಂಘಗಳ ಮುಖಾಂತರ ರೈತರಿಗೆ ಶೇ.3 ರ ಬಡ್ಡಿ ದರದಲ್ಲಿ ರೂ.10.00 ಲಕ್ಷಗಳವರೆಗೆ ಮಧ್ಯಮಾವಧಿ ಕೃಷಿ ಸಾಲ ವಿತರಿಸಲಾಗುತ್ತಿದೆ.<br><br>3) ಹೈನುಗಾರಿಕೆ ಉದ್ದೇಶಕ್ಕಾಗಿ ಕೆ.ಸಿ.ಸಿ.ಸಾಲ: ಹಾಲು ಉತ್ಪಾದಕರ ಸಹಕಾರ ಸಂಘದ ಸದಸ್ಯರಿಗೆ ವಿಶೇಷವಾಗಿ ರೂ.2,00,000/- ಗಳವರೆಗೆ ತಮ್ಮ ಕ್ರಮಿಕ ಪತ್ತಿನ ಮಿತಿ ಮೀರದಂತೆ ಹೈನುಗಾರಿಕೆ ಉದ್ದೇಶಕ್ಕಾಗಿ ಕೆ.ಸಿ.ಸಿ ಸಾಲವನ್ನು ನೀಡಲಾಗುತ್ತಿದೆ.<br><br>ಈ ಮೇಲಿನ ಯೋಜನೆಗಳಡಿ ವಿತರಿಸಿದ ಸಾಲಗಳಿಗೆ ಬಡ್ಡಿ ಸಹಾಯಧನಕ್ಕಾಗಿ ಎರಡು ವರ್ಷಗಳಿಂದ ರೂ. 2,02,167.50 ಲಕ್ಷಗಳನ್ನು ಬಿಡುಗಡೆಗೊಳಿಸಿದೆ. |
| ಆ) | 2021 ನೇ ಸಾಲಿನಲ್ಲಿ ಸಹಕಾರ ಇಲಾಖೆಯ ವಿವಿಧ ಯೋಜನೆಗಳಿಗೆ ಮೀಸಲಿಟ್ಟಿರುವ ಅನುದಾನ ಎಷ್ಟು; ಹಾಗೂ ವೆಚ್ಚ ಮಾಡಿರುವ ಮೊತ್ತವೆಷ್ಟು; | 2021 ನೇ ಸಾಲಿಗೆ ಸಹಕಾರ ಇಲಾಖೆಯ ವಿವಿಧ ಯೋಜನೆಗಳಡಿ ರೂ. 1,14,833.00 ಲಕ್ಷಗಳನ್ನು ಮೀಸಲಿಟ್ಟಿದ್ದು, ಈ ಪೈಕಿ ಮೊದಲನೇ ತ್ರೈಮಾಸಿಕದ ಗುರಿ ರೂ. 27,832.75.00 ಲಕ್ಷಗಳಾಗಿದ್ದು, ರೂ. 25,702.00 ಲಕ್ಷಗಳು ಬಿಡುಗಡೆಗೊಳಿಸಿದ್ದು, ಜುಲೈ-2021 ರ ಅಂತ್ಯಕ್ಕೆ ರೂ. 25,572.50 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ. |

....2

| | | |
|---|---|---|
| ಇ) | ಈ ಯೋಜನೆಗಳಲ್ಲಿ ಸಹಾಯಧನ (ಸಬ್ಸಿಡಿ) ಹೊಂದಿರುವ ಯೋಜನೆಗಳಾವುವು; (ಯೋಜನೆಗಳ ಮಾಹಿತಿ ನೀಡುವುದು) | ರಾಜ್ಯದಲ್ಲಿ ರೈತರಿಗಾಗಿ ಇರುವ ಸಾಲ ಯೋಜನೆಗಳಲ್ಲಿ ಸಹಾಯಧನ (ಸಬ್ಸಿಡಿ) ಹೊಂದಿರುವ ಯೋಜನೆಗಳ ವಿವರ ಈ ಕೆಳಕಂಡಂತಿದೆ.<br>1. ಕುಟುಂಬಕ್ಕೆ ರೂ. 3.00 ಲಕ್ಷಗಳವರೆಗೆ ಶೂನ್ಯ ಬಡ್ಡಿ ದರದಲ್ಲಿ ಅಲ್ಪಾವಧಿ ಬೆಳೆ ಸಾಲ ಮತ್ತು ಪಶುಸಂಗೋಪನೆ / ಮೀನುಗಾರಿಕೆ ಉದ್ದೇಶಗಳಿಗೆ ದುಡಿಯುವ ಬಂಡವಾಳವಾಗಿ ರೂ.2.00 ಲಕ್ಷಗಳವರೆಗೆ ಶೂನ್ಯ ಬಡ್ಡಿದರದ ಸಾಲದ ಯೋಜನೆ<br>2. ಕುಟುಂಬಕ್ಕೆ 10.00 ಲಕ್ಷಗಳವರೆಗೆ ಮಧ್ಯಮಾವಧಿ/ ದೀರ್ಘಾವಧಿ ಕೃಷಿ ಸಾಲಗಳನ್ನು ಶೇ.3 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆ. |
| ಈ) | ಈ ಸಾಲ ಯೋಜನೆಯ ಲಾಭ ಪಡೆಯಲು ರೈತರಿಗೆ ಅರಿವು ಮೂಡಿಸಲು ಸರ್ಕಾರ ಯಾವ ಯಾವ ಯೋಜನೆಗಳನ್ನು ಹಮ್ಮಿಕೊಂಡಿದೆ; | • ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ, ಫೆಬ್ರವರಿ 2020 ರಿಂದ ಕಿಸಾನ್ ಕ್ರೆಡಿಟ್ ಕಾರ್ಡ್ ಸಾಲ ವಿತರಣೆ ಅಭಿಯಾನ ಕೈಗೊಂಡಿದ್ದು, 'ಕೃಷಿಸಮ್ಮಾನ್' ಯೋಜನೆಯಲ್ಲಿ ಯಾವ ಬ್ಯಾಂಕಿನಲ್ಲಿ ಡಿಬಿಟಿ ಮೂಲಕ ಪ್ರೋತ್ಸಾಹಧನ ಪಡೆದಿರುತ್ತಾರೊ ಅಂತಹ ರೈತರನ್ನು ಸಂಪರ್ಕಿಸಿ ಸಾಲ ಪಡೆಯಲು ಅರಿವು ಮೂಡಿಸಲಾಗುತ್ತಿದೆ.<br>• ರಾಜ್ಯದ ಹಾಲು ಉತ್ಪಾದಕ ಸಹಕಾರ ಸಂಘಗಳು, ಹಾಲು ಪೂರೈಸುತ್ತಿರುವ ರೈತರಿಗೆ ಹೈನುಗಾರಿಕೆ ದುಡಿಯುವ ಬಂಡವಾಳ ಸಾಲದ ಕುರಿತಂತೆ ಅರಿವು ಮೂಡಿಸಿ ಅರ್ಜಿ ಪಡೆದು ಸಂಬಂಧಪಟ್ಟ ಬ್ಯಾಂಕುಗಳಿಗೆ ಸಲ್ಲಿಸಿ ಸಾಲ ವಿತರಿಸಲಾಗುತ್ತಿದೆ.<br>• ಸರ್ಕಾರದ ವಿವಿಧ ಯೋಜನೆಗಳ ಬಗ್ಗೆ ಪತ್ರಿಕಾ ಪ್ರಕಟಣೆ, ಆಕಾಶವಾಣಿ, ದೃಶ್ಯಮಾಧ್ಯಮದ ಮೂಲಕ ಪ್ರಚಾರ ಮಾಡಲಾಗುತ್ತಿದೆ. |
| (ಉ) | ರೈತರಿಗೆ ವಾಹನ ಸಾಲ ಯೋಜನೆ ಜಾರಿಯಲ್ಲಿದೆಯೇ; ಹಾಗಿದ್ದಲ್ಲಿ ಯಾವ ಯಾವ ವಾಹನಗಳಿಗೆ ಸಾಲ ನೀಡಲಾಗುತ್ತಿದೆ; ವಾಹನ ಸಾಲ ಯೋಜನೆಯಲ್ಲಿ ಸಬ್ಸಿಡಿ ನೀಡಲಾಗುತ್ತಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | ರೈತರಿಗೆ ಶೇ.3ರ ಬಡ್ಡಿದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡುವ ಯೋಜನೆಯಲ್ಲಿ ಕೃಷಿ ಯಂತ್ರೋಪಕರಣಗಳಡಿ ಟ್ರಾಕ್ಟರ್ ಹಾಗೂ ಪವರ್ ಟಿಲ್ಲರ್‌ಕೊಳ್ಳಲು ಬಡ್ಡಿ ಸಹಾಯಧನ ಲಭ್ಯವಿದ್ದು, ಇತರೆ ವಾಹನಗಳಿಗೆ ಲಭ್ಯವಿರುವುದಿಲ್ಲ. |

**ಸಂಖ್ಯೆ: ಸಿಒ 273 ಸಿಎಲ್‌ಎಸ್ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು